## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1322
2. ಸದಸ್ಯರ ಹೆಸರು : ಡಾ: ಚಂದ್ರಶೇಖರ್ ಬಿ. ಪಾಟೀಲ್(ಪದವೀಧರರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 23.09.2021
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯ ಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಒಬ್ಬ ಸರ್ಕಾರಿ ನೌಕರನ ಕುಟುಂಬ ಸದಸ್ಯರು, ಆದಾಯ ತೆರಿಗೆ ಪಾವತಿದಾರರಾಗಿರುತ್ತಾರೆ; | ಸರ್ಕಾರಿ ನೌಕರನ ಕುಟುಂಬದ ಸದಸ್ಯರು ಅವರ ಆದಾಯ ಮೂಲಗಳಿಂದ ಬ್ಯಾಂಕುಗಳಿಂದ ಸಾಲ ಪಡೆದು ಅಥವಾ ವ್ಯವಹಾರದಿಂದ ಉಳಿತಾಯ ಮಾಡಿದ ಹಣದಿಂದ ಸ್ಥಿರಾಸ್ತಿಗಳನ್ನಾಗಲೀ / ವ್ಯಾಪಾರವನ್ನಾಗಲೀ ಹೊಂದಲು ಅವಕಾಶವಿದೆ. |
| ಆ) | ಅವರ ಆದಾಯ ಮೂಲಗಳಿಂದ ಬ್ಯಾಂಕುಗಳಿಂದ ಸಾಲ ಪಡೆದು ಅಥವಾ ವ್ಯವಹಾರದಿಂದ ಉಳಿತಾಯ ಮಾಡಿದ ಹಣದಿಂದ ಸ್ಥಿರಾಸ್ತಿಗಳನ್ನಾಗಲೀ / ವ್ಯಾಪಾರವನ್ನಾಗಲೀ ಹೊಂದಲು ಅವಕಾಶವಿದೆಯಲ್ಲವೇ; (ವಿವರ ನೀಡುವುದು) | |
| ಇ) | ಅಂತಹ ವಿವರಗಳನ್ನು ಆದಾಯ ತೆರಿಗೆ ರಿಟರ್ನ್‌ನಲ್ಲಿ ಘೋಷಿಸಿಕೊಂಡಿದ್ದರೂ ಸಹ, ಆ ಕುಟುಂಬದ ಸರ್ಕಾರ ನೌಕರನು ಆ ಕುಟುಂಬದ ಸದಸ್ಯರು ಐ.ಟಿ. ಇಲಾಖೆಗೆ ಘೋಷಿಸಿಕೊಂಡಿರುವ ಸ್ಥಿರಾಸ್ತಿ ಮತ್ತು ವ್ಯಾಪಾರಗಳಿಗೆ ಹೊಣೆಗಾರರೆಂದು ಮಾಡಲಾಗುವುದೇ; ಈ ಬಗ್ಗೆ ವಿವರ ಒದಗಿಸುವುದು? | ಕರ್ನಾಟಕ ಸರ್ಕಾರ (ನಡತೆ) ನಿಯಮಗಳು, 2021ರ ನಿಯಮ 24ರನ್ವಯ ಪ್ರತಿಯೊಬ್ಬ ಸರ್ಕಾರಿ ನೌಕರನು ಯಾವುದೇ ಸೇವೆಗೆ ಅಥವಾ ಹುದ್ದೆಗೆ ಮೊದಲು ನೇಮಕವಾಗುವಾಗ ಆತನು ತನ್ನ ಸ್ವಂತ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಾಗಲೀ ಅಥವಾ ಯಾವುದೇ ಇತರೆ ವ್ಯಕ್ತಿಯ ಹೆಸರಿನಲ್ಲಾಗಲೀ ಪಿತ್ರಾರ್ಜಿತವಾಗಿ ಬಂದ ಸ್ವಯಂ ಅರ್ಜಿಸಿದ ಅಥವಾ ಗುತ್ತಿಗೆ ಅಥವಾ ಅಡಮಾನದ ಮೇಲೆ ತಾನು ಹೊಂದಿರುವ ಸ್ಥಿರಾಸ್ತಿಯ ಪೂರ್ಣ ವಿವರಗಳನ್ನು 3 ತಿಂಗಳೊಳಗೆ ಸಲ್ಲಿಸಬೇಕಾಗುತ್ತದೆ. ಆ ತರುವಾಯ ಡಿಸೆಂಬರ್ 31ಕ್ಕೆ ಅಂತ್ಯಗೊಳ್ಳುವ ಪ್ರತಿ 12 ತಿಂಗಳಿಗೊಮ್ಮೆ ತನ್ನ ಮತ್ತು ತನ್ನ ಕುಟುಂಬದ ಎಲ್ಲಾ ಸದಸ್ಯರ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ವಾರ್ಷಿಕ ವಿವರ ಪಟ್ಟಿಯನ್ನು ಸಲ್ಲಿಸಬೇಕಾಗುತ್ತದೆ.<br><br>ಯಾರೇ ಸರ್ಕಾರಿ ನೌಕರನು ಅಥವಾ ಅವನ ಕುಟುಂಬದ ಯಾರೇ ಸದಸ್ಯನು ತನ್ನ ಸ್ವಂತ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಯಾರೇ ಸದಸ್ಯರ ಹೆಸರಿನಲ್ಲಾಗಲೀ ಗುತ್ತಿಗೆಯ, ಅಡಮಾನದ, ಖರೀದಿಯ, ಮಾರಾಟದ, ಉಡುಗೊರೆಯ ಮೂಲಕ ಅಥವಾ ಅನ್ಯಥಾ ಯಾವುದೇ ಸ್ಥಿರ ಸ್ವತ್ತನ್ನು ಅರ್ಜಿಸಲು ಅಥವಾ ವಿಲೇ ಮಾಡಲು ನೇಮಿಸಲಾದ ಪ್ರಾಧಿಕಾರಿಗೆ ಮೊದಲೇ ತಿಳಿಸಬೇಕಾಗುತ್ತದೆ. ಆದರೆ ಸರ್ಕಾರಿ ನೌಕರನ ಕುಟುಂಬದ ಸದಸ್ಯನು ಸರ್ಕಾರಿ ನೌಕರನದೇ ನಿಧಿಗಳಿಂದ ಬೇರೆಯದೇ ಆದ ಆತನ ಸ್ವಂತ ನಿಧಿಗಳಿಂದ (ಉಡುಗೊರೆಗಳು, ಪಿತ್ರಾರ್ಜಿತ, ಮೊದಲಾದವುಗಳೂ ಸೇರಿದಂತೆ) ಆತನ ಸ್ವಂತ ಹೆಸರಿನಲ್ಲಿ ಮತ್ತು ಆತನ ಸ್ವಂತ ಹಕ್ಕಿನಿಂದ ಮಾಡಿಕೊಂಡ ವ್ಯವಹಾರಗಳಿಗೆ ಇದು ಅನ್ವಯವಾಗುವುದಿಲ್ಲ. |

ಸಂಖ್ಯೆ: ಸಿಆಸುಇ 58 ಸೇನಿಸಿ 2021

(ಬಸವರಾಜ ಬೊಮ್ಮಾಯಿ)
ಮುಖ್ಯ ಮಂತ್ರಿ